# ಶ್ರೀ ಅಪ್ಪಾವರ ಕುರಿತಾದ ಸ್ತೋತ್ರ ಪದಗಳು

## ಶ್ರೀಮದಿಭರಾಮಪುರ ಕೃಷ್ಣಾರ್ಯಾಷ್ಟಕಮ್

**ಶ್ರೀ ರಾಮ ಚರಣ ದ್ವಂದ್ವವಾರ್ಧಿ ಚಂದ್ರೋದಯೋಪಮಃ।**
**ಶ್ರೀ ಕೃಷ್ಣ ಪೂಜಾನಿರತಃ ಕೃಷ್ಣೋ ಮಾಂ ಸರ್ವದಾವತು ॥**

ಶ್ರೀರಾಮನ ಚರಣ ದ್ವಂದ್ವವೆಂಬ ಸಮುದ್ರದಲ್ಲಿ ಚಂದ್ರೋದಯವಾದಂತೆ, ಶ್ರೀಕೃಷ್ಣನ ಪೂಜೆಯಲ್ಲಿ ನಿರತರಾದ ಶ್ರೀ ಕೃಷ್ಣಾಚಾರ್ಯರು ನನ್ನನ್ನು ಸರ್ವಕಾಲದಲ್ಲಿ ರಕ್ಷಿಸಲಿ.

**ಕೃಷ್ಣೋತ್ಕೃಷ್ಟ ದಯಾಪುಷ್ಟ ಕೃಷ್ಣಾಪತಿ ಸುಹೃತ್ ಪ್ರಿಯಂ।**
**ದೃಷ್ಟಾದೃಷ್ಟ ಪ್ರವಕ್ತಾರಂ ಕೃಷ್ಣಾಚಾರ್ಯ ಗುರುಂ ಭಜೇ ॥ ೧ ॥**

ಶ್ರೀ ಕೃಷ್ಣನ ಶ್ರೇಷ್ಠವಾದ ದಯೆಯಿಂದ ಪುಷ್ಟರಾದ, ದ್ರೌಪತಿ ಪತಿಯಾದ ಭೀಮಸೇನ ದೇವರ ಪ್ರೀತಿಪಾತ್ರರಾದ, ಭೂತ ವರ್ತಮಾನ ಭವಿಷ್ಯತ್‌ಗಳನ್ನು ಚೆನ್ನಾಗಿ ತಿಳಿದಿರುವ ಕೃಷ್ಣಾಚಾರ್ಯ ಗುರುಗಳನ್ನು ಭಜಿಸುತ್ತೇನೆ.

**ಶುಭದಂ ಸೇವಮಾನಾನಾಂ ಅಭಯಪ್ರದಮರ್ಥಿನಾಂ।**
**ಇಭರಾಮಪುರಾಗಾರಂ ಕೃಷ್ಣಾಚಾರ್ಯ ಗುರುಂ ಭಜೇ ॥ ೨ ॥**

ಸೇವಿಸುವವರಿಗೆ ಶುಭವನ್ನು ನೀಡುವ, ಬೇಡುವವರಿಗೆ ಅಭಯವನ್ನು ಕೊಡುವ, ಇಭರಾಮಪುರದಲ್ಲಿರುವಂತಹ ಕೃಷ್ಣಾಚಾರ್ಯ ಗುರುಗಳನ್ನು ಭಜಿಸುತ್ತೇನೆ.

**ರೋಗಾದ್ಯುಪದ್ರವಾರ್ತಾನಾಂ ಭೋಗಾಯತನ ಸೌಖ್ಯದಂ।**
**ಯೋಗಾಯೋಗ ಸಮಂ ಶಾಂತಂ ಕೃಷ್ಣಾಚಾರ್ಯ ಗುರುಂ ಭಜೇ ॥ ೩ ॥**

ರೋಗವೇ ಮೊದಲಾದ ಉಪದ್ರವಗಳಿಂದ ಪೀಡಿತರಾದವರಿಗೆ, ಹೆಚ್ಚಿನ ಸುಖವುಂಟುಮಾಡುವ, ಸುಖದುಃಖಗಳಲ್ಲಿ ಸ್ಥಿತಪ್ರಜ್ಞರಾದ ಕೃಷ್ಣಾಚಾರ್ಯ ಗುರುಗಳನ್ನು ಭಜಿಸುತ್ತೇನೆ.

**ಭೂತ ಪ್ರೇತ ಗ್ರಹಶ್ವೇತ ವಾತ ಪಿತ್ತ ಪ್ರಣಾದಯಃ।**
**ಭೀತಾ ಗಚ್ಛಂತಿ ಯಸ್ಮಾತ್ತಂ ಕೃಷ್ಣಾಚಾರ್ಯ ಗುರುಂ ಭಜೇ ॥ ೪ ॥**

ಭೂತ, ಪ್ರೇತ, ಗ್ರಹ, ತೊನ್ನು, ವಾತ, ಪಿತ್ತ, ವ್ರಣ ಮೊದಲಾದವು ಯಾರ ಸ್ಮರಣೆ ಮಾತ್ರದಿಂದ ಹೆದರಿ ಓಡುತ್ತವೆಯೋ ಅಂತಹ ಕೃಷ್ಣಾಚಾರ್ಯ ಗುರುಗಳನ್ನು ಭಜಿಸುತ್ತೇನೆ.

**ಶ್ರೀ ಭೂದೇವ ಗಣೈಃ ಪೂಜ್ಯಂ ಶ್ರೀ ಭೂಮಾಧಿಷಣಾಯುತಂ।**
**ಭೂಮೀಶಾದೃಷ್ಟ ವಿಭವಂ ಕೃಷ್ಣಾಚಾರ್ಯ ಗುರುಂ ಭಜೇ ॥ ೫ ॥**

ಬ್ರಾಹ್ಮಣರ ಗುಂಪಿನಿಂದ ಪೂಜಿಸಲ್ಪಡುವ, ಅತಿಶಯವಾದ ಪ್ರಜ್ಞೆಯುಳ್ಳ ಎಂದರೆ ಬೃಹಸ್ಪತ್ಯಾಚಾರ್ಯರಂತಿರುವ, ರಾಜವೈಭವದಿಂದ ಕೂಡಿರುವ ಕೃಷ್ಣಾಚಾರ್ಯ ಗುರುಗಳನ್ನು ಭಜಿಸುತ್ತೇನೆ.

**ಭಾರತೀಶ ಪದದ್ವಂದ್ವ ಸಾರಸ ಭ್ರಮರಾಯಿತಂ।**
**ಸುರವತ್ಕಾಂತಿ ಸಂಪನ್ನಂ ಕೃಷ್ಣಾಚಾರ್ಯ ಗುರುಂ ಭಜೇ ॥ ೬ ॥**

ಭಾರತೀಪತಿಯಾದ ಮುಖ್ಯಪ್ರಾಣನ ಪಾದ ಕಮಲದಲ್ಲಿ ದುಂಬಿಯಂತಿರುವ, ದೇವತೆಗಳಂತೆ ಪ್ರಕಾಶಮಾನರಾದ ಕೃಷ್ಣಾಚಾರ್ಯ ಗುರುಗಳನ್ನು ಭಜಿಸುತ್ತೇನೆ.

**ಶ್ರೀ ರಾಘವೇಂದ್ರ ಚಿತ್ತಜ್ಞಂ ಸಾರಮಾತ್ರ ವದಾವದಂ।**
**ದೂರೀಕೃತ ದುರಾಚಾರಂ ಕೃಷ್ಣಾಚಾರ್ಯ ಗುರುಂ ಭಜೇ ॥ ೭ ॥**

ಶ್ರೀ ರಾಘವೇಂದ್ರರ ಮನಸ್ಸನ್ನರಿತಿರುವ, ಯಥಾರ್ಥವಾದುದನ್ನು ಉಪದೇಶಿಸುವ, ದುರಾಚಾರಗಳನ್ನು ದೂರಮಾಡುವಂತಹ ಕೃಷ್ಣಾಚಾರ್ಯ ಗುರುಗಳನ್ನು ಭಜಿಸುತ್ತೇನೆ.

**ಶಿಷ್ಟೇಷ್ಟ ಜನಸಂತುಷ್ಟಂ ವೃಷ್ಣೀಶಾಂಘ್ರಿ ಸಮಾಶ್ರಿತಂ।**
**ಕಷ್ಟನಾಶಂ ಸ್ವಭಕ್ತಾನಾಂ ಕೃಷ್ಣಾಚಾರ್ಯ ಗುರುಂ ಭಜೇ ॥ ೮ ॥**

ಶ್ರೀ ಕೃಷ್ಣನ ಪಾದಗಳನ್ನು ಚೆನ್ನಾಗಿ ಆಶ್ರಯಿಸಿ, ಯೋಗ್ಯರಾದ ಮತ್ತು ಪ್ರೀತಿಪಾತ್ರರಾದ ತಮ್ಮ ಭಕ್ತರ ಕಷ್ಟವನ್ನು ನಾಶ ಮಾಡಿ ಸಂತೋಷ ಕೊಡುವ ಕೃಷ್ಣಾಚಾರ್ಯ ಗುರುಗಳನ್ನು ಭಜಿಸುತ್ತೇನೆ.

**ಅಷ್ಟಶ್ಲೋಕ ಮಯೀಂ ಮಾಲಾಂ ಕೃಷ್ಣಾಚಾರ್ಯಸ್ತವಾಭಿದಾಂ।**
**ಇಷ್ಟಸಿದ್ಧಿ ಲಭೇತ್ಸದ್ಯೋ ನಿಷ್ಠಯಾ ಜಪಕೃನ್ನರಃ ॥೯॥**

ಎಂಟು ಶ್ಲೋಕವುಳ್ಳ ಈ ಮಾಲೆಯು ಕೃಷ್ಣಾಚಾರ್ಯ ಸ್ತೋತ್ರ ರೂಪದಲ್ಲಿದೆ. ಇದನ್ನು ನಿಷ್ಠೆಯಿಂದ ಜಪಿಸುವ ನರನು ಅಲ್ಪಕಾಲದಲ್ಲಿಯೇ ಇಷ್ಟಾರ್ಥ ಹೊಂದುತ್ತಾನೆ.

**ಬಾಲೀಶೇನ ಕೃತಾಮಾಲಾ ಕಾಲೀನಾಥ ಪಾದಾಂಬುಜೆ।**
**ಲೋಲಪಟ್ಪದ ವದ್ಧೂಷಾಸ್ಯಾತ್ಸತಾಂ ಭಜತಾಂ ಮುದೇ ॥೧೦॥**

ಬಾಲ ಬುದ್ಧಿಯಿಂದ ಮಾಡಲ್ಪಟ್ಟ ಈ ಮಾಲೆಯು, ಕಾಲಿಂದಾದೇವಿಯ ಒಡೆಯನಾದ ಶ್ರೀ ಕೃಷ್ಣನ ಪಾದಕಮಲದಲ್ಲಿ ಆಸಕ್ತವಾದ ದುಂಬಿಯಂತೆ, ಸಜ್ಜನರಿಂದ ಧರಿಸಲ್ಪಟ್ಟು ಭಜಿಸುವವರಿಗೆ ಸಂತೋಷವನ್ನುಂಟು ಮಾಡುತ್ತದೆ.

"ಶ್ರೀ ಮಧ್ವೇಶ ಕೃಷ್ಣಾರ್ಪಣಮಸ್ತು"

❖ ❖ ❖